# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 281 |
| ಸದಸ್ಯರ ಹೆಸರು | : | ಶ್ರೀ ಕೆ.ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 15.12.2021 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿಯಲ್ಲಿ ಕಟ್ಟಡ ನಿರ್ಬಂಧಿತ ಪ್ರದೇಶದ ಮಿತಿ ಎಷ್ಟು; ಯಾವ ಯಾವ ಸಂದರ್ಭದಲ್ಲಿ ಈ ಮಿತಿಯಿಂದ ವಿನಾಯತಿಯನ್ನು ನೀಡಲಾಗಿದೆ; (ಪ್ರಕರಣವಾರು ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಪಿ.ಡಬ್ಲ್ಯುಡಿ 362 ಸಿಆರ್‌ಎಂ 98, ದಿನಾಂಕ:09.10.1998 ರನ್ವಯ ರಾಷ್ಟ್ರೀಯ ಹೆದ್ದಾರಿಯಲ್ಲಿ ಕಟ್ಟಡ ನಿಯಂತ್ರಣ ರೇಖೆಯ ಮಿತಿಯು ರಸ್ತೆಯ ಮಧ್ಯ ಭಾಗದಿಂದ 40 ಮೀಟರ್ ಇರುತ್ತದೆ. ಈ ಮಿತಿಯಿಂದ ವಿನಾಯಿತಿಯನ್ನು ನೀಡಿರುವ ಪ್ರಕರಣಗಳು ರಾಷ್ಟ್ರೀಯ ಹೆದ್ದಾರಿ ವಲಯದಲ್ಲಿ ದಾಖಲಾಗಿರುವುದಿಲ್ಲ. |
| ಆ) | ರಾಜ್ಯ ಹೆದ್ದಾರಿ ಕಟ್ಟಡ ನಿರ್ಬಂಧಿತ ಪ್ರದೇಶದ ಮಿತಿ ಎಷ್ಟು; ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಇದರ ಮಿತಿ ಎಷ್ಟು; ಗ್ರಾಮ ಪಂಚಾಯತಿಯ ಹೊರಭಾಗದಲ್ಲಿ ಇದರ ಮಿತಿ ಎಷ್ಟು; ಯಾವಯಾವ ಸಂಧರ್ಭದಲ್ಲಿ ಈ ಮಿತಿಯಿಂದ ವಿನಾಯತಿಯನ್ನು ನೀಡಲಾಗಿದೆ; | ಸರ್ಕಾರದ ಆದೇಶ ಸಂ: ಪಿಡಬ್ಲ್ಯುಡಿ/ 362/ ಸಿಆರ್‌ಎಂ/ 98, ದಿನಾಂಕ:09.10.1998 ರಲ್ಲಿ ರಾಜ್ಯ ಹೆದ್ದಾರಿಯ ಮಧ್ಯಭಾಗದಿಂದ ಅಕ್ಕಪಕ್ಕಕ್ಕೆ 40.00 ಮೀಟರ್ ವರೆಗೆ ಕಟ್ಟಡ ನಿಯಂತ್ರಣ ರಸ್ತೆ ಪರಿಮಿತಿಯನ್ನು ನಿಗಧಿಪಡಿಸಲಾಗಿರುತ್ತದೆ. ಹಾಗೂ ಜಿಲ್ಲಾ ಮುಖ್ಯ ರಸ್ತೆ ಮಧ್ಯಭಾಗದಿಂದ ಅಕ್ಕಪಕ್ಕಕ್ಕೆ 25.00 ಮೀಟರ್ ಕಟ್ಟಡ ನಿಯಂತ್ರಣ ರೇಖೆಯ ಪರಿಮಿತಿಯನ್ನು ನಿಗಧಿಪಡಿಸಲಾಗಿರುತ್ತದೆ. |
| ಇ) | ಜಿಲ್ಲಾ ಮುಖ್ಯ ರಸ್ತೆಯ ಕಟ್ಟಡ ನಿರ್ಬಂಧಿತ ಪ್ರದೇಶದ ಮಿತಿ ಎಷ್ಟು; ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಇದರ ಮಿತಿ ಎಷ್ಟು; ಗ್ರಾಮ ಪಂಚಾಯತಿಯ ಹೊರಭಾಗದಲ್ಲಿ ಇದರ ಮಿತಿ ಎಷ್ಟು; ಯಾವಯಾವ ಸಂದರ್ಭದಲ್ಲಿ ಈ ಮಿತಿಯಿಂದ ವಿನಾಯತಿಯನ್ನು ನೀಡಲಾಗಿದೆ; | ಸರ್ಕಾರದ ಆದೇಶ ಸಂ: ಪಿಡಬ್ಲ್ಯುಡಿ: 23: ಆರ್‌ಡಿಎಫ್: 2004, ದಿನಾಂಕ:18.10.2004 ರಲ್ಲಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ರಾಜ್ಯ ಹೆದ್ದಾರಿಗಳ ದಾಖಲಿತ ರಸ್ತೆ ಭೂಗಡಿಯ ಅಂಚಿನಿಂದ ಕಟ್ಟಡ ರೇಖೆಗಳ ಅಂತರವನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿದೆ: |

| ಕ್ರ ಸಂ | ಪರಿಮಿತಿ | ದಾಖಲಿತ ರಸ್ತೆ ಭೂ ಗಡಿಯ ಅಂಚಿನಿಂದ ಕಟ್ಟಡ ರೇಖೆಗಳ ಅಂತರ |
|---|---|---|
| (1) | ಗ್ರಾಮ ಪಂಚಾಯತಿ ಪರಿಮಿತಿಯಲ್ಲಿ | 6.00ಮೀಟರ್ |
| (2) | ಗ್ರಾಮ ಪಂಚಾಯತಿ ಪರಿಮಿತಿಯಿಂದ 5.00ಕಿಮೀ ದೂರದವರೆಗೆ | 12.00ಮೀಟರ್ |

ರಾಜ್ಯ ಹೆದ್ದಾರಿಯ ಹಾಗೂ ಜಿಲ್ಲಾ ಮುಖ್ಯ ರಸ್ತೆಯ ನಿಗಧಿತ ಮಿತಿಯಲ್ಲಿ ಯಾವುದೇ ವಿನಾಯತಿ ನೀಡಿರುವುದಿಲ್ಲ.

| | ಪ್ರಶ್ನೆಗಳು | ಉತ್ತರಗಳು |
|---|---|---|
| ಈ) | ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯರಸ್ತೆಯ ಇಕ್ಕೆಲದಲ್ಲಿ ಹೊಂದಿರುವವರಿಗೆ ಭೂ ಸ್ವಾಧೀನ ಮಾಡಿ ಪರಿಹಾರವನ್ನು ನೀಡದೇ ಕಟ್ಟಡ ಕಟ್ಟಲು ಅನುಮತಿಯನ್ನು ನೀಡದೇ ಇರುವುದು ಸರ್ಕಾರದ ನೀತಿಯಾಗಿದೆಯೇ; ಸಾಮಾನ್ಯ ನಾಗರಿಕರಿಗೆ ನ್ಯಾಯ ಒದಗಿಸಲು ಸರ್ಕಾರದ ಕ್ರಮವೇನು? | ಭವಿಷ್ಯದಲ್ಲಿ ರಸ್ತೆಗಳನ್ನು ಅಗಲೀಕರಣ ಮಾಡಬೇಕಾದ ಸಂದರ್ಭದಲ್ಲಿ ಇಕ್ಕೆಲಗಳ ಭೂ ಮಾಲೀಕರ ಕಟ್ಟಡಗಳಿಗೆ ಹೆಚ್ಚಿನ ಹಾನಿ ಉಂಟಾಗಬಾರದೆಂದು ಹಾಗೂ ಸರ್ಕಾರದ ಬೊಕ್ಕಸಕ್ಕೆ ಹೆಚ್ಚಿನ ಹೊರೆಯಾಗಬಾರದೆಂಬ ಉದ್ದೇಶದಿಂದ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶ/ಸುತ್ತೋಲೆಗಳನ್ವಯ ನಿಗದಿಪಡಿಸಿದ ರಸ್ತೆಯ ಕಟ್ಟಡ ನಿಯಂತ್ರಣ ರೇಖೆಯ ಪರಿಮಿತಿಯಲ್ಲಿ ಕಟ್ಟಡ ಕಟ್ಟಲು ಅನುಮತಿ ನೀಡಲಾಗುತ್ತಿಲ್ಲ.<br><br>ರಸ್ತೆಗಳ ಅಗಲೀಕರಣ/ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಂಡ ಸಂದರ್ಭದಲ್ಲಿ, ಭೂಸ್ವಾಧೀನ ಅವಶ್ಯಕತೆ ಕಂಡುಬಂದಲ್ಲಿ, ನಿಯಮಾನುಸಾರ ಭೂಸ್ವಾಧೀನ ಪ್ರಕ್ರಿಯೆ ಕೈಕೊಂಡು, ಅನ್ವಯವಾಗುವ ಭೂಪರಿಹಾರ ಮೊತ್ತವನ್ನು ನೀಡಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ. |

ಲೋಇ 104 ಸಿಕ್ಯೂಎನ್ 2021(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು